# ಪ್ರಕೃತಿ ಸುರಥ ಸಂವಾದ ಜ್ಞಾನ ಕಥನ

**ಅಧ್ಯಾಯ-೬೫**

ನಾರದ— ದೇವಿಯ ಸ್ತೋತ್ರಕವಚಗಳನ್ನೂ ಪೂಜಾಫಲ ಪೂಜಾಕಾಲಗಳನ್ನೂ ಹೇಳು.

ನಾರಾಯಣ— ಆರ್ದ್ರಾನಕ್ಷತ್ರದಲ್ಲಿ ದೇವಿಯನ್ನು ಬೋಧನೆಗೊಳಿಸಿ ಮೂಲಾ-ನಕ್ಷತ್ರದಲ್ಲಿ ಆವಾಹಿಸಿ ಉತ್ತರಾನಕ್ಷತ್ರದಲ್ಲಿ ಪೂಜಿಸಿ ಶ್ರವಣ ನಕ್ಷತ್ರದಲ್ಲಿ ವಿಸರ್ಜಿಸಬೇಕು.

ಆರ್ದ್ರಾಯುಕ್ತವಾದ ನವಮಿಯಲ್ಲಿ ದೇವಿಯ ಬೋಧನೆ ಮಾಡಿದ್ದರೆ ನೂರುವರ್ಷದ ಪೂಜೆಯ ಫಲ ಸಿಗುವುದು. ಮೂಲಾನಕ್ಷತ್ರದಲ್ಲಿ ಆವಾಹನೆ ಮಾಡಿದರೆ ನರಮೇಧಯಾಗದ ಫಲ. ಉತ್ತರಾನಕ್ಷತ್ರದಲ್ಲಿ ಪೂಜೆ ಮಾಡಿದರೆ ವಾಜಪೇಯ ಯಾಗದ ಫಲ. ಶ್ರವಣ ನಕ್ಷತ್ರದಲ್ಲಿ ವಿಸರ್ಜನೆ ಮಾಡುವುದರಿಂದ ಸಂಪತ್ತನ್ನೂ ಪುತ್ರಪೌತ್ರ ಸಂತತಿಯನ್ನೂ ಪಡೆಯುತ್ತಾನೆ. ಭೂಪ್ರದಕ್ಷಿಣೆಯ ಫಲವನ್ನೂ ಪಡೆಯುತ್ತಾನೆ.

ನವಮ್ಯಾದಿ ತಿಥಿಗಳಿಗೆ ಆರ್ದ್ರಾದಿ ನಕ್ಷತ್ರಗಳ ಯೋಗ ಸಿಗದಿದ್ದರೂ ಕೇವಲ ನವಮಿಯಲ್ಲಿ ಬೋಧನೆ ಮಾಡಿ ಒಂದು ಪಕ್ಷಕಾಲ ಪೂಜಿಸಿ ದಶಮೀದಿನ ವಿಸರ್ಜಿಸಬೇಕು. ಅಶ್ವಮೇಧಯಾಗದ ಫಲ ಸಿಗುತ್ತದೆ. ಬಲಿಯನ್ನು ಸಪ್ತಮೀದಿನ ಪೂಜಾನಂತರದಲ್ಲಿ ಕೊಡಬೇಕು. ಅಷ್ಟಮೀದಿನ ಕೇವಲ ಪೂಜೆ. ಅಂದು ಬಲಿದಾನ ಕೊಡಕೂಡದು. ಕೊಟ್ಟರೆ ಆಪತ್ತು ಬರುವುದು. ನವಮಿಯಂದೂ ವಿಧ್ಯುಕ್ತವಾಗಿ ಬಲಿಕೊಡಬೇಕು.

ಬಲಿದಾನದಿಂದ ದುರ್ಗೆಗೆ ಪ್ರೀತಿಯಾಗುವುದು, ನಿಜ. ಆದರೂ ಅದು ರಾಜಸ. ಸಾತ್ವಿಕವಲ್ಲ. ಯಜ್ಞಕರ್ಮದಲ್ಲಿಯೂ ಹಿಂಸಾಜನ್ಯಪಾಪವಿದೆ. ಏಕೆಂದರೆ ಉತ್ಸರ್ಜನೆ ಮಾಡುವವನು, ದಾನ ಮಾಡುವವನು, ಕಡಿಯುವವನು, ಪೋಷಿಸುವವನು, ರಕ್ಷಿಸು-ವವನು, ಯೂಪದಲ್ಲಿ ಮುಂದೆ ಬಂಧಿಸುವವನು, ಹಿಂದೆ ಬಂಧಿಸುವವನು ಈ ಏಳು ಮಂದಿಯೂ ವಧಕರ್ತೃಗಳೇ ಆಗುವರು. ಈ ಜನ್ಮದಲ್ಲಿ ಈತ ಪಶುವನ್ನು ಕೊಂದರೆ ಮುಂದಿನ ಜನ್ಮದಲ್ಲಿ ಪಶು ಈತನನ್ನು ಕೊಲ್ಲುತ್ತದೆ ಎಂದು ವೇದದಲ್ಲಿ ಹೇಳಿದೆ. ಆದರಿಂದಲೆ ವೈಷ್ಣವರು ಹಿಂಸಾರಹಿತವಾದ ಸಾತ್ವಿಕ ವೈಷ್ಣವಪೂಜೆ ಮಾಡುವರು. ಆದರಿಂದಲೇ ದೇವ ದೇವಿಯರು ಪ್ರೀತರಾಗುವರು.

ಸುರಥರಾಜ ಒಂದು ವರ್ಷ ಭಕ್ತಿಯಿಂದ ದುರ್ಗೆಯನ್ನಾರಾಧಿಸಿ ಸಾಕ್ಷಾತ್ಕರಿಸಿ-ಕೊಂಡ. ದೇವಿ ಗ್ರೀಷ್ಮಕಾಲದ ಸೂರ್ಯನಂತೆ ತೇಜಃಸ್ವರೂಪಳಾಗಿ ಮನೋಹರ-ರೂಪದಿಂದ ಪ್ರತ್ಯಕ್ಷಳಾದಳು. ರಾಜ ಭಕ್ತಿಯಿಂದ ತಲೆಬಾಗಿ ಸ್ತೋತ್ರ ಮಾಡಿದ.